# ಚುಟಕ

ಜಿ. ಪಿ. ರಾಜರತ್ನಂ

ಚಿತ್ರಕಾರರು

ಎಂ. ವಿ. ಸೀತಾರಾಮಯ್ಯ



ಪ್ರೋಗ್ರೆಸ್ ಬುಕ್‌ಸ್ಟಾಲ್

ಮೈಸೂರು

೧೯೩೩

ಕನ್ನಡ ನಾಡಿನ ಕಂದನಿಗೆ

---

Checked

ಚುಟಕ ಚುಟಕ
ಚೋಟಾರಿ!
ಪದ್ಯ ನಿನಗಿದು
ಮೋಟಾರಿ!
ಪದ್ಯ ನಿನಗಿದು
ಮೋಟಾರಿ!
ಚುಟಕ ಚುಟಕ
ಚೋಟಾರಿ!

# ವಿವರ

# ಚುಟುಕ

ಝಣ! ಝಣ! ಝಣ!
ಜೇಬು ತುಂಬ ಹಣ!
ಮೇಲಕೆತ್ತಿ
ಬಿಡಲು ಸದ್ದು
ಠಣ್! ಠಣ! ಠಣ!

. . . .

ನದಿಯಲೊಂದು ಬಕ
ಮುದುರಿಕೊಂಡು ಮೊಕ
ಕಾಲನೆತ್ತಿ
ಕುಣಿಯುತಿತ್ತು
ತಕಾ! ತಕ್ಕ! ತಕ!

. . . .

ಸುತ್ತ ಹಸುರು ವನ!
ನಡುವೆ ಮೇವ ದನ!
ಮರದ ಬಳಿ
ಗೊಲ್ಲನುಲಿ:
ತಾನ! ನಾನ! ನನ!

# ಅಂಬಾಲ್

ನೀನು ನಾಯಿ ನಾನು ಮೊಲ
ಚೊಟ್ ! ಚೊಟ್ ! ಚೊಟ್ !
ಮೊದಲೆ ಬಂದು ಮುಟ್ಟಬೇಡ
ಏ ! ಅಂಬಾಲ್ !

ಕರಿಯ ಕಂಬ ಅಜ್ಜಿಯಪ್ಪ
ಚೊಟ್ ! ಚೊಟ್ ! ಚೊಟ್ !
ಅಜ್ಜಿ ಮುಟ್ಟಿ ನಿಂತಿದೇನೆ !
ಏ ! ಅಂಬಾಲ್ !

ಇಷ್ಟು ಇಷ್ಟು ಬೆಣ್ಣೆ ತಕೊ
ಚೊಟ್ ! ಚೊಟ್ ! ಚೊಟ್ !
ಎಡವಿ ಬಿದ್ದೆ—ಕೊಂಚ ತಾಳು
ಏ ! ಅಂಬಾಲ್ !

ಕುರೋ ಕುರೋ ಮುಟ್ಟು ಬಂದು
ಚೊಟ್ ! ಚೊಟ್ ! ಚೊಟ್ !
ಹಿಡಿಯಲಿಲ್ಲ—ಎಲ್ಲ ಸುಳ್ಳು
ಏ ! ಅಂಬಾಲ್ !

# ಟಗರಿನ ಢಿಕ್ಕಿ

ಮೈಯಿಗೆ ಮೈಯ ಮೆತ್ತಿ
ಅಲ್ಲಿ ಇಲ್ಲಿ ಸುತ್ತಿ
ಎರಡು ಟಗರು ಹತ್ತಿ
ಸೇರಿತು ಬೆಟ್ಟದ ನೆತ್ತಿ.

ಬೆಟ್ಟದಲೊಂದು ಉಪ್ಪು
ರುಚಿಯ ದಂಟುಸೊಪ್ಪು
ಸಿಕ್ಕಲು ಮುಕವನು ಕಪ್ಪು
ಮಾಡಿದುವೆರಡೂ ಬೆಪ್ಪು !

ಸಿಕ್ಕದ ಸೊಪ್ಪು ಮುಕ್ಕಿ
ಕೊಂಬಿಗೆ ಕೊಂಬು ತಿಕ್ಕಿ
ಢೀ ಢೀ ಢೀ ಢೀ ಢಿಕ್ಕಿ !
ಬಿತ್ತು ರಕ್ತ ಕಕ್ಕಿ !



# ಚುಟುಕ

‘ನನ್ನ ಬೆರಳು ಸಿಹಿ!
ಸರದ ಕಲ್ಲು ಕಹಿ!’
ಎಂದು ಪಾಪ
ಬೆರಳ ಚೀಪಿ
ನಕ್ಕ ‘ತಿಪ್ಪಿ! ಇಹಿ!’

. . . .

ಹಾರೆ ಹಿಡಿದು ಅಗೆ!
ದೊಡ್ಡ ಹಳ್ಳ ತೆಗೆ!
ಆಚೆ ಕಡೆಗೆ
ಈಚೆ ಕಡೆಗೆ
ಹತ್ತು ಸಾರಿ ನೆಗೆ!

. . . .

ಮೀನಿಗೊಬ್ಬ ಹದಿ
ಹಾಕಿ ಒಂದು ನದಿ
ನೀರನೆಲ್ಲ
ಕೆದಕಲಲ್ಲಿ
ಕೈಯ ತುಂಬ ಬದಿ!

# ವಾರಕೆ ಏಳೇ ಏಳು ದಿನ

ವಾರಕೆ ಏಳೇ ಏಳು ದಿನ !
ಆದಿತ್ಯವಾರವೆ ರಜದ ದಿನ !
ಸೋಮವಾರ ಚಿಣ್ಣಿಯಕೋಲು !
ಮಂಗಳವಾರ ವಾಲೀಬಾಲು !
ಬೇಟೆಯ ಆಟವು ಬುಧವಾರ !
ಗರುಡಿಯ ಮನೆಯಲಿ ಗುರುವಾರ !
ಶುಕ್ರವಾರಕೆ ಬುಗುರಿ ಚೆಂಡು !
ಶನಿವಾರಕ್ಕೆ ಕ್ರಿಕೆಟ್ಟು ದಾಂಡು !
ವಾರಕೆ ಏಳೇ ಏಳು ದಿನ !
ಆಟಕೆ ಸಾಲದು ಏಳು ದಿನ !

# ಚುಟುಕ

(ಸಂಗ್ರಹ.)

ಬೆರಳ ತುದಿಯಲಿ ಉಗುರ ಕಂಡೆ
ಮರದ ತುದಿಯಲಿ ಚಿಗುರ ಕಂಡೆ
ಕುರಿಯ ಹಿಂದಲಿ ಟಗರ ಕಂಡೆ
ಇವುಗಳನು ನಾ ಕಂಡೆನು.

# ಬುರುಡೆ ಹೊಡೆದ ಕುರುಡರು

---

ಗರುಡಿ ಮಾಡಿದ
ಕುರುಡರಿಬ್ಬರು
ಕರಡಿ ಹಿಡಿಯುವೆನೆಂದರು
ಹೊರಟು ಬಲೆಯನು
ಹರಡದಿದ್ದರು
ಬುರುಡೆ ಹೊಡೆಯುತ ಬಂದರು.

‘ ಕಾಡಿನಲಿ ಆ
ಕೇಡಿ ಕರಡಿಯು
ನೋಡಿದಾಗಲೆ ಹಿಡಿದೆವು
ಓಡಿಹೋಗಲು
ಬೇಡಿಕೊಂಡಿತು—
ಕೂಡಲೆಯೆ ಅದ ಬಿಡಿದೆವು ’

ಎಂದು ಸುಳ್ಳಿನ
ಮುಂದೆ ಸುಳ್ಳನು
ತಂದು ಸೇರಿಸುತಿದ್ದರು
ಬಂತು ಕರಡಿ
ಬಂದಿತೆನ್ನಲು
ಧಂಧಮೆನ್ನುತ ಬಿದ್ದರು.

# ಚುಟುಕ

---

ನಮ್ಮ ಮನೆಯ ದೊರೆ
ದೊಡ್ಡ ಹುಲ್ಲು ಹೊರೆ
ಹತ್ತಿಸಿಟ್ಟು
ಕೈಲಿ ಮುಟ್ಟಿ
ಹಾಕಿಕೊಂಡ ಬರೆ!

. . . .

ಮುರುಕು ಬಿಲದ ಇಲಿ!
ಹೊರಗೆ ಬಂದು ನಲಿ!
ಬಾಲ ಬಿಚ್ಚಿ
ನೆಲಕೆ ಚುಚ್ಚಿ
ಸುತ್ತುವುದನು ಕಲಿ!

. . . .

ಕೈಗೆ ನೀರ ಹಿಡಿ!
ಹಲ್ಲನುಜ್ಜು ನಡಿ!
ಮೈಯ ತೊಳೆದು
ಹಣೆಗೆ ಬಳಿದು
ತಿಂಡಿ ಗಿಂಡಿ ಹೊಡಿ!

# ಕೂಸುಮರಿ

ಕೂಸುಮರಿ! ಕೂಸುಮರಿ!
ಕೂಸುಮರಿ ಬೇಕೇ ಕೂಸುಮರಿ!
ಅಣ್ಣನ ಬೆನ್ನಿಗೆ ಮೈಯನು ಬೆಸೆದು
ಕತ್ತಿನ ಸುತ್ತಲು ಕೈಗಳನೆಸೆದು
ಸೊಂಟದ ಸುತ್ತಲು ಕಾಲನು ಬಿಗಿದು
ಅಣ್ಣನು ನೆಗೆದರೆ ತಾನೂ ನೆಗೆದು
ಮುದ್ದಾಗಿರುವುದು ಕೂಸುಮರಿ!
ಕನ್ನಡ ನಾಡಿನ ಕೂಸುಮರಿ!

ಕೂಸುಮರಿ! ಕೂಸುಮರಿ!
ಕೂಸುಮರಿ ಬೇಕೇ ಕೂಸುಮರಿ!
ಕೆದರಿದ ಕೂದಲ ಮರೆಯಿಂದಿಣಿಕಿ
'ಐ! ಐ!' ಎನ್ನುತ ಕಾಡುತ ಕೆಣಕಿ
ಬೆಳಗಿನ ಝಾವದ ಕತ್ತಲೆಯಲ್ಲಿ
ಎಳೆ ಬಿಸಿಲೆರಚುವ ಸೂರ್ಯನ ಹೋಲಿ
ಮುದ್ದಾಗಿರುವುದು ಕೂಸುಮರಿ!
ಕನ್ನಡ ನಾಡಿನ ಕೂಸುಮರಿ!

ಕೂಸುಮರಿ ! ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !
ಭೂಮಿಯ ಬಲೆಯಿಂದಾಕಾಶಕ್ಕೆ
ಸರ್ರೆಂದೇರುತ ಬಣ್ಣದ ರೆಕ್ಕೆ
ಹರಡುತ ಹಾಡುವ ಹಕ್ಕಿಯ ಹಾಗೆ
ಹಾಡುತಲಿರುವುದು ಬೆನ್ನಿನ ಮೇಗೆ
ಕನ್ನಡ ನಾಡಿನ ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !



# ಸುರುಸುರು ಬತ್ತಿ

ಬೇಡಾ ಕತ್ತಿ
ಕತ್ತರಿ ಎತ್ತಿ
ಕಾಗದ ಕೆತ್ತಿ
ಗೋಂದನು ಮೆತ್ತಿ
ಸುರುಸುರು ಬತ್ತಿ
ಸುರುಬತ್ತಿ !

ಗೋಂದನು ಮೆತ್ತಿ
ಸುರುಳಿ ಸುತ್ತಿ
ಮದ್ದನು ಒತ್ತಿ
ಹಿಡಿ ಮೇಲೆತ್ತಿ
ಸುರುಸುರು ಬತ್ತಿ
ಸುರುಬತ್ತಿ !

ಹಿಡಿ ಮೇಲೆತ್ತಿ
ಬೆಂಕಿಗೆ ಹತ್ತಿ
ಕಿಡಿಗಳ ಬುತ್ತಿ
ಜೋಕೆ ನೆತ್ತಿ
ಸುರುಸುರು ಬತ್ತಿ
ಸುರುಬತ್ತಿ !

# ಚುಟುಕ

ಹೊಟ್ಟೆಬಾಕತನ
ಕಲಿತ ಮೂರು ಜನ
ಊಟಕೆಂದು
ಎಲೆಯ ಮುಂದೆ
ಕುಳಿತರೆಲೆಯು ಘನ !

• • • •

ಚಿಕ್ಕ ಮುದ್ದು ಹರಿ
ಕೈಯಲೆರಡು ಗರಿ
ತಾಳುವನು
ಹೇಳುವನು :
‘ ನಾನು ಗಿಳಿಯ ಮರಿ ! ’

• • • •

‘ ತೆಗೆದುಕೊಂಡು ದಡಿ
ಹಾಳು ನಾಯ ಬಡಿ ! ’
ಎಂದನೊಬ್ಬ
ಪಂಚೆ ತಬ್ಬಿ
‘ ಹೋಯ್ತು ! ಹೋಯ್ತು ಮಡಿ !

# ಈ ಕತೆ

ಒಂದು ಕಾಡಿನ ಮಧ್ಯದೊಳಗೆ
ಎರಡು ಮರಗಳ ನಡುವೆ ಮಲಗಿ
ಮೂರು ಕರಡಿಗಳಾಡುತಿದ್ದುವು
ನಾಕು ಮರಿಗಳ ಸೇರಿಸಿ.

ಐದು ಜನರಾ ಬೇಟೆಗಾರರು
ಆರು ಬಲೆಗಳನೆಳೆದು ತಂದು
ಏಳು ಕರಡಿಯು ಹಿಡಿದು ನೋಡದೆ
ಎಂಟ ಹಿಡಿದೆವು ಎಂದರು.

ಒಂಭತೆಂದನು ಅವರಲೊಬ್ಬ
ಹತ್ತು, ಎಂದನು ಬೇರೆಯವನು
ಎಣಿಸಿ ನೋಡಿದರೇಳೆ ಏಳು—
ಇಲ್ಲಿಗೀಕತೆ ಮುಗಿಯಿತು.

# ರೊಟ್ಟಿಯಂಗಡಿಯ ಕಿಟ್ಟಪ್ಪ

ರೊಟ್ಟಿಯಂಗಡಿಯ ಕಿಟ್ಟಪ್ಪ !
ನನಗೊಂದು ರೊಟ್ಟಿ ತಟ್ಟಪ್ಪ !
    ಪುಟಾಣಿ ರೊಟ್ಟಿ
    ಕೆಂಪಗೆ ಸುಟ್ಟು
ಒಂಭತ್ತು ಕಾಸಿಗೆ ಕಟ್ಟಪ್ಪ !
ಬಿದ್ದು ಹೋದೀತು ಕಿಟ್ಟಪ್ಪ !



ರೊಟ್ಟಿಯಂಗಡಿಯ ಕಿಟ್ಟಪ್ಪ !
ರೊಟ್ಟಿಯ ನೋಡಿದ ! ಮುಟ್ಟಪ್ಪ !
ರೊಟ್ಟಿಯು ಸೊಟ್ಟು !
ಹಸಿ ಹಸಿ ಹಿಟ್ಟು !
ರೊಟ್ಟಿಯ ಬೇರೆ ತಟ್ಟಪ್ಪ !
ನನಗಿದು ಬೇಡ ಕಿಟ್ಟಪ್ಪ !
ರೊಟ್ಟಿಯಂಗಡಿಯ ಕಿಟ್ಟಪ್ಪ !
ಬೇರೆಯ ರೊಟ್ಟಿಯ ತಟ್ಟಪ್ಪ !
ಗುಂಡಗೆ ರೊಟ್ಟಿ
ಸುಡದೇ ಕೊಟ್ಟೆ—
ಠೂ ! ಠೂ ! ಸಂಗ ಬಿಟ್ಟೆಪ್ಪ !
ಬಿಟ್ಟರೆ ಪುನಃ ಕಟ್ಟೆಪ್ಪ !

## ಚುಟಕ

ಅಡುಗೆಯ ಮನೆಯಲಿ
ಗೋಡೆಯಲಿ
ತೂಗಿದ ಬಿದಿರಿನ
ಗೂಡೆಯಲಿ
ಸರಸರವಾಗಿದೆ
ಕೋಡುಬಳೆ !
ನೋಡುತ ಕುಳಿತಿದೆ
ಗೋಡೆಮೊಳೆ !

# ಚುಟುಕ

---

ನಮ್ಮ ಚಿಕ್ಕ ಮಣಿ
ಹೇಳಿದನು ಕಣಿ :
‘ ಇಬ್ಬರೆದ್ದು
ಕೊಡಲು ಗುದ್ದು
ಜಗಳ ಹಣಾಹಣಿ ! ’

. . . .

ಮೇಲೆ ಗುಡುಗು ದನಿ !
ಕೆಳಗೆ ಮಳೆಯು ಹನಿ !
ಜನರು ಎಲ್ಲ
ನುಡಿವ ಸೊಲ್ಲು :
‘ ಏನು ಹಾಳು ಶನಿ ! ’

. . . .

ಕಾಲಿಗೆರಡು ರುಳಿ
ಹಾಕಿ ನೆಲವ ತುಳಿ !
ತುಳಿಯೆ ನೀನು
ಆದುದೇನು ?
ನೆಲದಲೆರಡು ಗುಳಿ !

# ರೋತೆ ರಾಮು

---

ಕೂಡಿ ಕಳೆವ ಲೆಕ್ಕವೆಲ್ಲ
ಹಾಳು ! ಥೂ ! ಅನಿಷ್ಟ !
ತಿಂದು ತಿಂದು ಮಲಗುವುದಕೆ
ನನಗೆ ಪೂರ ಇಷ್ಟ !

ಗುಣಿಸುವುದು ಭಾಗಿಸುವುದು
ಎಲ್ಲ ಬಲು ಪಜೀತಿ !
ತಿಂದು ಮಲಗಿ ಗೊರಕೆ ಬಿಡಲು
ನನಗೆ ತುಂಬ ಪ್ರೀತಿ !

ಲೆಕ್ಕ ಪಕ್ಕ ಆಟ ಪಾಟ
ಎಲ್ಲ ಪೂರ ಕಷ್ಟ !
ತಿಂದು ಹಾಗೆ ಗೊರಕೆ ಬಿಡುತ
ಮಲಗಲೇನು ನಷ್ಟ ?

ಆಟ ಪಾಟ ನನಗೆ ಬೇಡ
ಎಂದು ರೋತೆ ರಾಮು
ಮಲಗಿ ಮಲಗಿ ತಂದುಕೊಂಡ
ಮೈ ಕೈಗೆಲ್ಲ ಜೋಮು !

# ಗುಳ್ಳೆನರಿ

'ಮರಿಯೇ! ಮರಿಯೇ!
ಸಿಂಹದ ಮರಿಯೇ!
ಏನನು ತಿನ್ನುವೆ ಮುದ್ದುಮರಿ?'
'ನರಿಯೇ! ನರಿಯೇ!
ಗುಳ್ಳೇ ನರಿಯೇ!
ತಿನ್ನುತಲಿರುವೆನು ಕಡಲೆಪುರಿ!'



'ಮರಿಯೇ! ಮರಿಯೇ!
ಸಿಂಹದ ಮರಿಯೇ!
ನನಗೂ ಕೊಡುವೆಯ ಕಡಲೆಪುರಿ?'
'ನರಿಯೇ! ನರಿಯೇ!
ಗುಳ್ಳೇನರಿಯೇ!
ಕೊಡುವೆನು ಕುರೊಕುರೊ ಗುಳ್ಳೆನರಿ!'

‘ ಮರಿಯೋ ! ಮರಿಯೋ !
ಸಿಂಹದ ಮರಿಯೋ !
ಪುರಿ ನನಗೇತಕೆ ? ಕಲ್ಲು ಬರಿ !’
‘ ನರಿಯೋ ! ನರಿಯೋ !
ಗುಳ್ಳೆಯ ನರಿಯೋ !
ನರಿ ನೀನಲ್ಲವು ! ಬೆಪ್ಪೆ ಸರಿ !’

---

## ಚುಟಕ

ತುಂಟ ಮಲ್ಲ
ದೊಡ್ಡ ಕಲ್ಲ
ದಾರಿಗಡ್ಡ ಹಾಕದ
ತಿರುಗಿ ಜಾಣ
ಏಕೊ ಕಾಣೆ
ಪಕ್ಕಕದನೆ ನೂಕಿದ

# ಚುಟುಕ

---

ಕೂಗಿತೊಂದು ಮೊಲ:
‘ಬೇಕೆ ಹಸುರು ಹೊಲ?
ತಕಡಿ ಹಿಡಿದು
ಕೊಡುವೆ ಕಡಿದು
ಕಾಸಿಗೆರಡು ತೊಲ!’

• • • •

‘ಹಿಡಿವೆನೊಂದು ಕುರಿ’
ಎಂದು ಬಂತು ನರಿ!
ಕುರುಬ ಕೊಟ್ಟ
ಹತ್ತು ಪೆಟ್ಟು!
ಕೂಗಿ‘ ತಾಹ! ಉರಿ!’

• • • •

ಗೂಡ ಜೇನು ನೊಣ
ಮಣದ ಮೇಲೆ ಮಣ
ಜೇನು ತುಪ್ಪ
ಇಡುವುದಪ್ಪ!
ಅದಕೆ ಅದೇ ಹಣ!

# ಗುಬ್ಬಿ

---

ನಮ್ಮ ಮನೆಯಲೊಂದು ಗುಬ್ಬಿ
ಗೂಡ ಕಟ್ಟಿತು
ಗೂಡಿನೊಳಗೆ ಹುಲ್ಲು ಹಾಸಿ
ಮೊಟ್ಟೆಯಿಟ್ಟಿತು.

ಮೊಟ್ಟೆಯೊಡೆದು ಒಳಗಿನಿಂದ
ಮರಿಯು ಬಂದಿತು
ಬಂದು ಬಾಯಿಬಿಟ್ಟು ಕೂಗಿ
ಕಿಚಿಪಿಚೆಂದಿತು.

ಮರಿಯ ಕೂಗ ಕೇಳಿ ತಾಯಿ
ಗೂಡ ಬಿಟ್ಟಿತು
ಹಾರಿ ಹೋಗಿ ಬಂದು ಮರಿಗೆ
ಗುಟುಕ ಕೊಟ್ಟಿತು.

ಗುಟುಕು ನುಂಗಿ ಮರಿಯು ರೆಕ್ಕೆ
ಬಲಿತುಕೊಂಡಿತು
ರೆಕ್ಕೆ ಬಡಿದು ಹಾರುವುದನು
ಕಲಿತುಕೊಂಡಿತು.

ಮರಿಯು ದೊಡ್ಡದಾಗಿ ಮೊದಲ
ಗೂಡ ಬಿಟ್ಟಿತು
ತನಗೆ ಒಂದು ಬೇರೆ ಗೂಡ
ತಾನೆ ಕಟ್ಟಿತು.

ತನ್ನ ತಿಂಡಿ ತಾನೆ ಹೋಗಿ
ತರುತಲಿದ್ದಿತು
ಮದುವೆ ಗಿದುವೆ ಮಾಡಿಕೊಂಡು
ಹಾಯಾಗಿದ್ದಿತು.

---

## ಚುಟುಕ

ದೊಡ್ಡ ಪಟ್ಟೆ ಹುಲಿ
ಕಾಡು ದಾರಿಯಲಿ
ನಡುಗಿ ನಿಂತು
ಹೇಳಿತಿಂತು !
'ಅಯ್ಯೋ ! ಅಪ್ಪ ! ಚಳಿ !'

# ಬಳೆ

ಬಳೇ ಬೇಕೆ ಬಳೆ !
ತೊಡುವುದಕೆ ಬಳೆ !
ಕೈಯಿಗೊಳ್ಳೆ
ಗಾಜು ಬಳೆ !
ಬಳೇ ಬೇಕೆ ಬಳೆ !

ಬಳೇ ಬೇಕೆ ಬಳೆ !
ತಿನುವುದಕೆ ಬಳೆ !
ಬಾಯಿಗೊಳ್ಳೆ
ಕೋಡುಬಳೆ !
ಬಳೇ ಬೇಕೆ ಬಳೆ !

ಬಳೇ ಬೇಕೆ ಬಳೆ !
ತರಹವಾರಿ ಬಳೆ !
ಗಾಜುಬಳೆ !
ಕೋಡುಬಳೆ !
ಬಳೇ ಬೇಕೆ ಬಳೆ !

# ಕಳ್ಳ ರಂಗಪ್ಪ

ಕಳ್ಳ ರಂಗಪ್ಪನಿಗೆ ಸಿಹಿ ಬಹಳ ಇಷ್ಟ.
ಸಿಹಿ ಇಟ್ಟರವನೆದುರು ಉಳಿಯುವುದೆ ಕಷ್ಟ !

ಜೇನುಗೂಡಿನ ತುಂಬ ಸಿಹಿ ಜೇನುತುಪ್ಪ
ಇರುವುದನು ಕೇಳಿದ್ದ ಕಳ್ಳ ರಂಗಪ್ಪ !

'ಜೇನು ತುಪ್ಪವು ಬಿಟ್ಟಿ ಗೂಡಿನಲಿ ಸಿಕಲು
ಕಾಸುಕೊಟ್ಟದ ಕೊಳಲು ನನಗೆಲ್ಲಿ ತಿಕಲು'

ಎಂದು ಜೇನಿರಿಸಿದ್ದ ತುಪ್ಪವನು ಕಳಲು
ಕಾದಿದ್ದನಿಳಿವುದಕೆ ಕತ್ತಲೆಯು ನೆಳಲು.

ಕತ್ತಲಾಯಿತು ! ಮೇಲೆ ಲಕ್ಷ ನಕ್ಷತ್ರ !
ಕಳ್ಳತನ ಬಲು ಕೆಡುಕು ! ರಂಗಪ್ಪ ! ಭದ್ರ !

• • • •

ಹಗಲೆಲ್ಲ ಹೂವುಗಳ ಸಾರವನು ಹೀರಿ
ರಾತ್ರೆ ಗೂಡನು ಜೇನು ಮುತ್ತಿತ್ತು ಸೇರಿ.

ಹಗಲೆಲ್ಲ ಅಲೆದಾಡಿ ದುಡಿದು ಸಾಕಾಗಿ
ರಾತ್ರಿಯಲಿ ಮಲಗಿತ್ತು ಜೇನು ಜೋಕಾಗಿ.

ಗೂಡಿಗಿಟ್ಟನು ಕಳ್ಳ ರಂಗಪ್ಪ ಕೈಯ!
ಅವನ ಕೈ ತಾಕಿತ್ತು ಜೇನುಗಳ ಮೈಯ!

ಜೇನುಗಳು ಒಟ್ಟಾಗಿ ಝ್ಯುಯೆಂದು ಎದ್ದು
'ಕಳ್ಳ! ಕಳ್ಳಾ!' ಎನಲು ಹೆಚ್ಚಿದುದು ಸದ್ದು!

ಸದ್ದ ಕೇಳಿದ! ಬಿದ್ದು ಓಡಿದನು ಕಳ್ಳ!
ತುಪ್ಪ ತಿನಲಿಲ್ಲವನು! ತಿಂದ ಬರಿ ಮುಳ್ಳ!



# ಚುಟುಕ

---

ಬಿಗಿದು ಕಟ್ಟು ಕಸೆ !
ಕತ್ತಿ ತೆಗೆದು ಮಸೆ !
ಕಾಳೆಗಕೆ
ಕಳುಹುವುದಕೆ
ಮನೆಯ ಮುಂದೆ ಹಸೆ !

• • • •

ಜೆಟ್ಟಿ ತನ್ನ ತಲೆ
ಮೇಲೆ ದೊಡ್ಡ ಮಲೆ
ಎತ್ತಿದರೆ
ಕೂಗಿದರು
ಎಲ್ಲ ಜನರು : ‘ ಭಲೆ ! ’

• • • •

ಒಂದು ಚಿಕ್ಕ ಹುಳು
ನುಂಗಲೈದು ಗಳು
ಅದರ ಸಿವರು
ಬಾಯು ಕವರಿ
ಕಣ್ಣು ತುಂಬ ಅಳು !

# ನವಿಲು

---

ಗಗನದೊಡಲು
ಗುಡುಗು ಸಿಡಿಲು-
ಗಳನು ಎಸೆದು ಬೆಳೆಸಿತು
ತಲೆಯ ಮೇಲೆ
ಮಾಲೆ ಮಾಲೆ-
ಯಾಗಿ ಮಿಂಚು ಥಳಿಸಿತು.

ಕಾಡಿನೊಂದು
ನವಿಲಿಗಂದು
ಬಹಳ ಹರುಷ ಬೆಳೆಯಿತು
'ಮಳೆಯ ಕಾಲ
ಬಂತು ಭಲ'
ಎಂದು ರಾಗ ಎಳೆಯಿತು.

ಚಾಚಿ ಎದೆಯ
ತಲೆಯ ತುದಿಯ
ಜುಟ್ಟನೊದರಿ ಕುಣಿಸಿತು
ಕಾಲ ನೂಕಿ
ತಾಳ ಹಾಕಿ
ಒಂದು ಎರಡು ಎಣಿಸಿತು.

ಗರಿಯ ಬಿಚ್ಚಿ
ದನಿಯ ಹೆಚ್ಚಿ-
ಸುತ್ತ ಕುಣಿದು ಮೆರೆಯಿತು
ಅದನು ಕಂಡು
ಮುಗಿಲ ದಂಡು
ಹಿಗ್ಗಿ ಮಳೆಯ ಕರೆಯಿತು.



# ಒಂದು ಕತೆ

ಪಯಣಕೆ ನಿಂತಿತು
ಮಯಣದ ಗಾಡಿ!
ಒಂಟೆತ್ತಿನ ಗಾಡಿ!
ಗಾಡಿಯು ಮುಂದಿನ
ಜೋಡಿಯ ನೋಡಿ!
ಬೆಂಕಿಯ ಹಸು ಜೋಡಿ!

ಬಂಡಿಯಲೇನಿದೆ?
ಜೊಂಡು ಕಮಾನು!
ಹುಲ್ಲಿನ ಸಾಮಾನು!
ಬಂಡಿಯು ನಡೆಸಲು
ಗುಂಡಗೆ ಮಿಾನು!
ಕಂಡೆನು ಅದ ನಾನು!

ಹಸುಗಳ ಬೆಂಕಿಯು
ಬಿಸಿ ಬಿಸಿ ಸರಿದು
ಜೊಂಡೂ ಹುಲ್ಲುರಿದು
ಉರಿಯಲಿ ಮೇಣವು
ಕರಗಿತು ಹರಿದು!
ಮಿಾನೆಗರಿತು ಹುರಿದು!

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.